CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೨೯, ೨೦೦೪ (ವೈಶಾಖ ೯, ಶಕ ವರ್ಷ ೧೯೨೬) | ಸಂಚಿಕೆ ೧೮ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕಮಾಂಡೆಂಟ್, 1ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ನಂ: 60, ರಿಚ್‌ಮಂಡ್ ರಸ್ತೆ, ಬೆಂಗಳೂರು-560 025**

**ಸಂಖ್ಯೆ: ವಾವಿ:76:2004-05 ದಿನಾಂಕ: 19ನೇ ಏಪ್ರಿಲ್ 2004**

**ಖಾಲಿ ಆಯಿಲ್ ಡ್ರಮ್‌ಗಳ ಸಾರ್ವಜನಿಕ ಟೆಂಡರ್ ಹಾಗೂ ಬಹಿರಂಗ ಹರಾಜು**

ಈ ಕಛೇರಿಯ ಪೆಟ್ರೋಲ್ ಬಂಕ್‌ನಲ್ಲಿರುವ 50 ಖಾಲಿ ಆಯಿಲ್ ಡ್ರಮ್‌ಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ: 9-6-2004 ರಂದು ಸಂಜೆ 4-00 ಗಂಟೆಯವರೆಗೆ ನಿಗದಿಪಡಿಸಲಾಗಿದೆ. ಸಾರ್ವಜನಿಕ ಬಹಿರಂಗ ಹರಾಜನ್ನು ದಿನಾಂಕ: 10-6-2004 ರಂದು ಬೆಳಿಗ್ಗೆ 11-00 ಘಂಟೆಗೆ ನಡೆಸಲಾಗುವುದು.

ಇ.ಎಂ.ಡಿ. ರೂ: 500-00 (ರೂಪಾಯಿ ಐದು ನೂರು ಮಾತ್ರ)

ಪಿ.ಆರ್. 179 ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು.

**ಉಪ ಕೃಷಿ ನಿರ್ದೇಶಕರ ಕಛೇರಿ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಬೆಳ್ತಂಗಡಿ**

**ಮರು ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ಸಂ:ಜಿಕೃತಕೇ:ವಾಹನ:ವಿಲೆ:2002-03, ದಿನಾಂಕ: 16ನೇ ಏಪ್ರಿಲ್ 2004**

**ವಿಷಯ:** ಈ ಕಛೇರಿಯ ಮೆಟಡೋರ್ ಮಿನಿಬಸ್ ವಾಹನ ಸಂಖ್ಯೆ ಎಂಇಎಕ್ಸ್ 6476 ನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡಲು ಪ್ರಕಟಣೆ.

1. ಈ ಕೆಳಗೆ ನಮೂದಿಸಿರುವ ಮೆಟಡೋರ್ ವಾಹನ ಸಂಖ್ಯೆ ಎಂಇಎಕ್ಸ್ 6476ನ್ನು ನಿಯಮಾನುಸಾರ ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಬೆಳ್ತಂಗಡಿ ದ.ಕ.ಜಿಲ್ಲೆ ಅಥವಾ ಅವರಿಂದ ಪ್ರಾಧಿಕಾರ ಪಡೆದ ಪ್ರತಿನಿಧಿಯಿಂದ ದಿನಾಂಕ 10-6-2004 ರಂದು ಬೆಳಿಗ್ಗೆ 11-00 ಗಂಟೆಯ ನಂತರ ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಲಾಗುವುದು ಎಂದು ಸಾರ್ವಜನಿಕರ ಅವಗಾಹನೆಗಾಗಿ ಈ ಮೂಲಕ ಅಧಿಸೂಚಿಸಲಾಗಿದೆ. ಅವಶ್ಯವಿದ್ದಲ್ಲಿ ಹರಾಜನ್ನು ಮುಂದಿನ ಕೆಲಸದ ದಿನದಂದು ಕೂಡಾ ಮುಂದುವರಿಸಲಾಗುವುದು.

2. ಪ್ರತಿಯೊಬ್ಬ ಖರೀದಿದಾರನು ತನ್ನ ಹೆಸರು ಮತ್ತು ಪೂರ್ಣ ವಿಳಾಸವನ್ನು ನೀಡಿ ಹರಾಜಿಗೆ ಮೊದಲು ಪ್ರತ್ಯೇಕ ಮುಂಗಡವಾಗಿ ರೂ.2000-00 ಮಾತ್ರ ಮೊತ್ತವನ್ನು ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಬೆಳ್ತಂಗಡಿ ಇವರ ಹೆಸರಿನಲ್ಲಿ ಪಡೆದಿರುವ ಡಿಮ್ಯಾಂಡ್ ಡ್ರಾಫ್ಟ್‌ನ್ನು ಅಥವಾ ನಗದು ರೂಪದಲ್ಲಿ ನಗದು ವಿಭಾಗದಲ್ಲಿ ಠೇವಣಿ ಇಡಬೇಕು. ಅವಿಜೇತ ಖರೀದಿದಾರರಿಗೆ ಹರಾಜು ಮುಗಿದ ಕೂಡಲೇ ಈ ಠೇವಣಿಯನ್ನು ಹಿಂದಿರುಗಿಸಲಾಗುವುದು. ಈ ಸಂಬಂಧದಲ್ಲಿ ಯಾವುದೇ ಚೆಕ್ಕನ್ನು ಅಂಗೀಕರಿಸುವುದಿಲ್ಲ. ಮುಂಗಡ ಹಣದ ಮೊಬಲಗನ್ನು ಈ ಕಛೇರಿಯ ನಗದು ವಿಭಾಗದಲ್ಲಿ ದಿನಾಂಕ 10-6-2004 ರಂದು ಹರಾಜು ಪ್ರಾರಂಭವಾಗುವುದಕ್ಕಿಂತ ಒಂದು ಗಂಟೆ ಮುಂಚಿತವಾಗಿ ಪಾವತಿ ಮಾಡಿ ಸ್ವೀಕೃತಿ ಪಡೆದು ಹರಾಜಿನಲ್ಲಿ ಭಾಗವಹಿಸುವುದು.

3. ಯಶಸ್ವಿ ಬಿಡ್‌ದಾರನು ಅವರ ಹೊಣೆಯಲ್ಲಿ ಜಿಲ್ಲಾಧಿಕಾರಿ, ದ.ಕ.,ಮಂಗಳೂರು ಇವರಿಂದ ಹರಾಜು ಅನುಮೋದಿತವಾದ ಒಂದು ವಾರದೊಳಗಾಗಿ ವಾಹನವನ್ನು ಕೊಂಡೊಯ್ಯಬೇಕು. ತಪ್ಪಿದಲ್ಲಿ ಮುಂಗಡ ಹಾಗೂ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಯಶಸ್ವಿ ಬಿಡ್‌ದಾರರು ಒಟ್ಟು ಬಿಲ್ಲು ಶೇಕಡ 25 ಹಣವನ್ನು ತಕ್ಷಣ ಹಾಗೂ ಶೇಕಡಾ 75 ಹಣವನ್ನು ಅನುಮೋದನೆ ಆದ ಬಳಿಕ ಪಾವತಿಸತಕ್ಕದ್ದು.

4. ಹರಾಜು ಕೂಗುವುದಕ್ಕೆ ಮೊದಲು ಪ್ರತಿಯೊಬ್ಬ ಖರೀದಿದಾರನೂ ಈ ಹರಾಜಿನ ಷರತ್ತುಗಳನ್ನು ತಿಳಿದುಕೊಂಡಿರುವುದು ಮತ್ತು ಅರ್ಥ ಮಾಡಿಕೊಂಡಿರುವುದು ಅವಶ್ಯಕವಾಗಿರುತ್ತದೆ. ಷರತ್ತುಗಳನ್ನು ತಿಳಿದಿಲ್ಲವೆಂಬ, ತಪ್ಪಾಗಿ ಅರ್ಥ ಮಾಡಿಕೊಂಡಿರುವ ಅಥವಾ ಅಜ್ಞಾನದ ವಾದವನ್ನು ಅಂಗೀಕರಿಸುವುದಿಲ್ಲ.

5. ಈ ಕೆಳಗೆ ಸಹಿ ಮಾಡಿರುವವರು ಯಾವುದೇ ವ್ಯಕ್ತಿ ಅಥವಾ ವ್ಯಕ್ತಿಗಳ ಬಿಡ್ಡನ್ನು ಅದಕ್ಕೆ ಯಾವುದೇ ಕಾರಣ ಕೊಡದೇ ಒಪ್ಪಿಕೊಳ್ಳಬಹುದು. ಅಥವಾ ನಿರಾಕರಿಸಬಹುದು. ಈ ವಿಚಾರದಲ್ಲಿ ಈ ಇಲಾಖಾ ಅಧಿಕಾರಿಗಳದೇ ಅಂತಿಮ ತೀರ್ಮಾನವಾಗಿರುತ್ತದೆ.

6. ಹರಾಜಿನ ಕ್ರಮವನ್ನು ರೂ.100 (ರೂಪಾಯಿ ಒಂದು ನೂರು ಮಾತ್ರ) ಏರಿಕೆ ಕ್ರಮದಲ್ಲಿ ಕೂಗಬೇಕು.

7. ಯಾವುದೇ ವಿವಾದ ಉಂಟಾದಲ್ಲಿ ಹರಾಜಿಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಈ ಕೆಳಗೆ ಸಹಿ ಮಾಡಿದವರ ನಿರ್ಣಯವೇ ಅಂತಿಮವಾಗಿರತಕ್ಕದ್ದು ಮತ್ತು ಕಾನೂನು ಪ್ರಕಾರ ಬದ್ಧವಾಗಿರತಕ್ಕದ್ದು. ಹರಾಜಿಗೆ ಉದ್ದೇಶಿಸಲಾಗಿರುವ ವಾಹನವನ್ನು ಹರಾಜು ಪ್ರಾರಂಭವಾಗುವುದಕ್ಕೆ ಒಂದು ವಾರ ಮುಂಚಿತವಾಗಿ ಬೆಳ್ತಂಗಡಿ ಬೀಜೋತ್ಪಾದನಾ ಕೇಂದ್ರದ ವಠಾರದಲ್ಲಿ ಪರಿವೀಕ್ಷಣೆಗೆ ಒದಗಿಸಲಾಗುವುದು.

8. ಯಾವುದೇ ಹೆಚ್ಚಿನ ವಿವರಗಳನ್ನು ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಬೆಳ್ತಂಗಡಿ ಇವರ ಕಛೇರಿ ಕೆಲಸದ ದಿನಗಳಂದು ಕಛೇರಿಯ ವೇಳೆಯಲ್ಲಿ ಖುದ್ದಾಗಿ ಪಡೆಯಬಹುದು.

9. ಬಿಡ್‌ದಾರರು:ಟೆಂಡರ್‌ದಾರರು ರೂ.2000-00 ಗಳ ಇಎಂಡಿಯನ್ನೊಳಗೊಂಡಂತೆ ದಿನಾಂಕ 10-6-2004 ರಂದು ಪೂರ್ವಾಹ್ನ ಹತ್ತು ಗಂಟೆಯೊಳಗಾಗಿ ಸೀಲ್ ಮಾಡಿದ ಟೆಂಡರುಗಳನ್ನು ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. ಅದರ ನಂತರ ಸಲ್ಲಿಸಲಾದ ಬಿಡ್ ಟೆಂಡರ್‌ಗಳನ್ನು ಮತ್ತು ಇಎಂಡಿ ಇಲ್ಲದ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ. ಸದರಿ ಬಿಡ್:ಟೆಂಡರುದಾರರು ಇಎಂಡಿ ನೀಡಿರುವ ಬಗ್ಗೆ ಹರಾಜು ಪ್ರಾಧಿಕಾರದಲ್ಲಿ ದಾಖಲಾತಿ ತೋರಿಸಿ ಬಹಿರಂಗ ಹರಾಜಿನಲ್ಲಿ ಸಹ ಭಾಗಿಯಾಗಬಹುದಾಗಿದೆ. ಆದಾಗ್ಯೂ ಬಹಿರಂಗ ಹರಾಜು ದರ ಅಥವಾ ಟೆಂಡರು ದರ ಯಾವುದು ಹೆಚ್ಚೋ ಆ ದರವನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.

10. ಯಶಸ್ವಿ ಬಿಡ್‌ದಾರರು:ಟೆಂಡರ್‌ದಾರರು ವಾಹನದ ಮೌಲ್ಯದೊಂದಿಗೆ ಸರ್ಕಾರಿ ನಿಯಮಾವಳಿಯಂತೆ ಮಾರಾಟ ತೆರಿಗೆ ಪಾವತಿಸಬೇಕು.

**ವಾಹನದ ವಿವರ**

| | | |
|---|---|---|
| ಮಾಡೆಲ್ | : | ಮೆಟಡೋರ್ ಡೀಸಲ್ ಮಿನಿಬಸ್ |
| ಚಾಸಿ ಸಂಖ್ಯೆ | : | 3 ಎಫ್‌ಡಿ 195579 |
| ಇಂಜಿನ್ ಸಂಖ್ಯೆ | : | ಡಿ 181787 |
| ಖರೀದಿಸಿದ ವರ್ಷ | : | 1976 |
| ರಿಜಿಸ್ಟರ್ ಸಂಖ್ಯೆ | : | ಎಂಇಎಕ್ಸ್ 6476 |

ಪಿ.ಆರ್. 180 ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಬೆಳ್ತಂಗಡಿ, ದ.ಕ.

## ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ, ಹಾಸನ

### ಅಧಿಸೂಚನೆ ಸಂಖ್ಯೆ:ಪಿಎಂಟಿ:19:02-03 ದಿನಾಂಕ: 19ನೇ ಏಪ್ರಿಲ್ 2004

**ವಿಷಯ:** ಪೊಲೀಸ್ ವಾಹನಗಳ ಅನುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ರವರ ಪತ್ರ ನಂ.ಲೆಕ್ಕ (3):ಪಿಎಂಟಿ:230:03-04. ದಿನಾಂಕ: 31-3-2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ದಿನಾಂಕ: 27-5-04 ರಂದು ಬೆಳಿಗ್ಗೆ 11-00 ಗಂಟೆಗೆ ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಹೊಸಲೈನ್ ರೋಡ್ ಹಾಸನದಲ್ಲಿ ಪೊಲೀಸ್ ವಾಹನಗಳ 1999-00, 2000-01, 2001-02, ಮತ್ತು 2002-03ನೇ ಸಾಲಿನ ಅನುಪಯುಕ್ತ ಟೈರು, ಟ್ಯೂಬು, ಪ್ಲಾಷ್ ಬ್ಯಾಟರಿ ಮತ್ತು ಬಿಡಿಭಾಗಗಳನ್ನು ಟೆಂಡರ್:ಬಹಿರಂಗ ಹರಾಜು ಮಾಡಲಾಗುವುದು. ಕಛೇರಿ ವೇಳೆಯಲ್ಲಿ ಹಾಸನ ಡಿಎಆರ್ ಕಛೇರಿಯಲ್ಲಿ ಅನುಪಯುಕ್ತ ವಸ್ತುಗಳನ್ನು ನೋಡಲು ಅವಕಾಶವಿರುತ್ತದೆ.

**ಹರಾಜಿನ ಷರತ್ತು ನಿಬಂಧನೆಗಳು**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜು ಮಾಡುವ ಸ್ಥಳದಲ್ಲಿ ಹರಾಜು ಮಾಡುವುದಕ್ಕಿಂತ ಮುಂಚಿತವಾಗಿ ರೂ. 1000-00 ನಗದು ಠೇವಣಿ ಕಟ್ಟಿ, ಹೆಸರನ್ನು ನೊಂದಾಯಿಸಿಕೊಳ್ಳುವುದು. ಯಾವುದೇ ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ.
2. ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು.
3. ಟೆಂಡರ್ ಫಾರಂನಲ್ಲಿ ಯಾವ ಸಾಲಿನ ನಿರುಪಯುಕ್ತ ವಸ್ತುಗಳಿಗೆ ಎಂಬ ಮಾಹಿತಿ ಬರೆದು ಬಿಡ್‌ಮೊತ್ತವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲೂ ಬರೆಯಬೇಕು. ಬೆಲೆಯನ್ನು ಬರೆಯುವಾಗ ತಿದ್ದುಪಡಿ ಮಾಡಿದ್ದಲ್ಲಿ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು. ಟೆಂಡರ್ ಮತ್ತು ಠೇವಣಿ ಹಣವನ್ನು ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆರವರ ವಿಳಾಸಕ್ಕೆ

ದಿನಾಂಕ: 26-5-04 ರಂದು ಮಧ್ಯಾಹ್ನ 4-00 ಗಂಟೆಯೊಳಗಾಗಿ ತಲುಪಿಸತಕ್ಕದ್ದು. ನಂತರ ಬಂದ ಟೆಂಡರ್‌ಗಳನ್ನು ಮಾನ್ಯ ಮಾಡಲಾಗುವುದಿಲ್ಲ.

4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ ಟೆಂಡರ್‌ದಾರರು ಸಹಾ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
5. ಟೆಂಡರ್:ಹರಾಜಿನಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುತ್ತಾರೋ ಅಂತಹವರನ್ನು ಯಶಸ್ವಿ ಟೆಂಡರ್:ಸವಾಲುದಾರರೆಂದು ಪರಿಗಣಿಸಲಾಗುವುದು.
6. ಯಶಸ್ವಿಯಾದವರು ಪ್ರತಿ ಅನುಪಯುಕ್ತ ವಸ್ತುಗಳ ಹೆಚ್ಚಿನ ಬಿಡ್ ಬೆಲೆಯ ಶೇಕಡ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಪಾವತಿಸಬೇಕು. ಮೇಲಾಧಿಕಾರಿಗಳಿಂದ ಅನುಮತಿ ದೊರೆತ ಮೇಲೆ, ಉಳಿಕೆ ಹಣ ಹಾಗೂ ಚಾಲ್ತಿಯಲ್ಲಿರುವ ತೆರಿಗೆ ಇತ್ಯಾದಿಯನ್ನು ಕಟ್ಟಲು ತಿಳಿಸಲಾಗುವುದು. ಸಕಾಲದಲ್ಲಿ ಪೂರ್ತಿಹಣ ಪಾವತಿಸಿ ಅನುಪಯುಕ್ತ ವಸ್ತುಗಳನ್ನು ತೆಗೆದುಕೊಂಡು ಹೋಗದಿದ್ದಲ್ಲಿ ಕಟ್ಟಿರುವ ಶೇ.25 ರಷ್ಟು ಹಣವನ್ನು ಹಾಗೂ ಇಎಂಡಿ ಹಣವನ್ನು ಸರ್ಕಾರಕ್ಕೆ ಜಮಾ ಮಾಡಲಾಗುವುದು ಹಾಗೂ ಪುನಃ ಅಧಿಸೂಚನೆ ಹೊರಡಿಸಿ ಬಹಿರಂಗ ಹರಾಜು ಮಾಡಲಾಗುವುದು.
7. ಎಲ್ಲಾ ಹಣವನ್ನು ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
8. ಯಶಸ್ವಿಯಾಗದವರ ಠೇವಣಿಯನ್ನು ಹರಾಜು ಮುಗಿದ ಕೂಡಲೇ ಅವರಿಗೆ ಹಿಂತಿರುಗಿಸಲಾಗುವುದು.
9. ಪೂರ್ತಿ ಹಣವನ್ನು ಸಂದಾಯ ಮಾಡಿದ ಮೇಲೆ ಸಂಬಂಧಿಸಿದ ಅನುಪಯುಕ್ತ ವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ಸಾಗಿಸಿಕೊಳ್ಳಲು ಸಂಬಂಧಪಟ್ಟ ಯಶಸ್ವಿದಾರರ ವಶಕ್ಕೆ ಕೊಡಲಾಗುವುದು.
10. ಹರಾಜಿನ ಸಮಯದಲ್ಲಿ ಯಾವುದೇ ತಕರಾರು ಉದ್ಭವಿಸಿದಲ್ಲಿ ಐ.ಜಿ.ಪಿ. ದಕ್ಷಿಣ ವಲಯ ಮೈಸೂರು ರವರ ನಿರ್ಣಯವೇ ಅಂತಿಮವಾದದ್ದು.
11. ಹರಾಜಿನಲ್ಲಿ ಯಾವುದೇ ಟೆಂಡರ್:ಸವಾಲನ್ನು ಪುರಸ್ಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು ಹಾಸನ ಜಿಲ್ಲೆರವರು ಹೊಂದಿರುತ್ತಾರೆ. ಈ ಎಲ್ಲಾವುಗಳ ಬಗ್ಗೆ ಮೇಲ್ಮನವಿ ಇತ್ಯಾದಿ ಇರುವುದಿಲ್ಲ.
12. ಹರಾಜಿನಲ್ಲಿ ಭಾಗವಹಿಸುವವರೆಲ್ಲರೂ ತಪ್ಪದೇ ಸರ್ಕಾರಿ ನಿಯಮಗಳನ್ನು ಪಾಲಿಸತಕ್ಕದ್ದು.

ಪಿ.ಆರ್. 182 ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಹಾಸನ ಜಿಲ್ಲೆ, ಹಾಸನ.

**KARNATAKA PUBLIC SERVICE COMMISSION (DEPARTMENTAL EXAMINATIONS)**
**PARK HOUSE, BANGALORE-1**
**Notification No.DE (1) 28/03-04/PSC Dated: 13th April 2004**

The register numbers of the officials of the Department of Printing Stationery & Publication who have passed in Kannada viva-voce test in the Second Session of Departmental Examination 2003 are as follows:-

**Center: MYSORE**

| | | | | | |
|---|---|---|---|---|---|
| KANNADA | : | 63292 | 63299 | 63300 | 63301 |

Secretary and Controller, Departmental Examinations
P.R. 184 Karnataka Public Service Commission, Bangalore.

**ಅಧ್ಯಕ್ಷರು ಮತ್ತು ಅಧೀಕ್ಷಕರು, ಟೆಂಡರ್ ಸಮಿತಿ, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ**
**ಅಧೀಕ್ಷಕರವರ ಕಾರ್ಯಾಲಯ, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**
**ನಂ.ಚಿಸಾಆ:ಲೆಪ(4):ಪ್ರ.ಸಂ.4:2004-05, ದಿನಾಂಕ: 12ನೇ ಏಪ್ರಿಲ್ 2004**

**ವಿಷಯ:** 2004-05ನೇ ಸಾಲಿಗೆ ಚಿಗಟೇರಿ ಸಾರ್ವಜನಿಕ ಆಸ್ಪತ್ರೆ ಮತ್ತು ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ ಇಲ್ಲಿಗೆ ಆಹಾರ ಪದಾರ್ಥಗಳನ್ನು, ಬ್ರೆಡ್ ಮತ್ತು ಹೆಚ್‌ಎನ್‌ಎಸ್ ವಸ್ತುಗಳನ್ನು ಸರಬರಾಜು ಮಾಡಲು ಟೆಂಡರ್ ಕರೆಯುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ ಪಿಎಲ್‌ಎಂ 196 ಪಿಟಿಡಿ 64, ದಿನಾಂಕ 30ನೇ ಡಿಸೆಂಬರ್ 1964.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ ಹಾಗೂ ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ ದಾವಣಗೆರೆ ಇಲ್ಲಿಗೆ (ಟೆಂಡರ್ ಅಂಗೀಕೃತವಾದ ದಿನಾಂಕದಿಂದ 31-3-2005ರ ಅವಧಿಗೆ) ಬೇಕಾಗುವ ಆಹಾರ ಪದಾರ್ಥಗಳು, ಪ್ರಥಮ ದರ್ಜೆ ಬ್ರೆಡ್ ಹಾಗೂ ಹೆಚ್‌ಎನ್‌ಎಸ್ ವಸ್ತುಗಳನ್ನು ಸರಬರಾಜು ಮಾಡಲು ಜಿಲ್ಲಾ ಶಸ್ತ್ರ ಚಿಕಿತ್ಸಕರು, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ ದಾವಣಗೆರೆ ಇವರ ಹೆಸರಿನಲ್ಲಿ ಮೊಹರು ಮಾಡಿದ ಟೆಂಡರನ್ನು ಎರಡು ಲಕೋಟೆ (ಟೂ ಕವರ್ ಸಿಸ್ಟಂ) ದಿನಾಂಕ:25-5-04ರ ಮಧ್ಯಾಹ್ನ 1.00 ಗಂಟೆಗೆ ಕರೆಯಲಾಗಿದೆ. ಮೊಹರಾದ ಟೆಂಡರ್‌ಗಳನ್ನು ಅದೇ ದಿನ ಟೆಂಡರ್ ಕಮಿಟಿಯ ಸಮಕ್ಷಮದಲ್ಲಿ ಮಧ್ಯಾಹ್ನ 3.30 ಗಂಟೆಗೆ ತೆರೆಯಲಾಗುವುದು. ಮುದ್ರಿತ ನಮೂನೆಯಲ್ಲಿ ಆಹಾರ ಸಾಮಗ್ರಿ, ಉತ್ತಮ ದರ್ಜೆಯ ಬ್ರೆಡ್ ಹಾಗೂ ಆಸ್ಪತ್ರೆ ಅವಶ್ಯ ವಸ್ತುಗಳಿಗಾಗಿ ಪ್ರತ್ಯೇಕವಾಗಿ 4 ಪ್ರತಿಗಳಲ್ಲಿ ಭರ್ತಿ ಮಾಡಿದ ಮೊಹರಾದ ಟೆಂಡರನ್ನು ಕೆಳಕಾಣಿಸಿದಂತೆ ನಿಗದಿತ ದಿನಾಂಕ ಹಾಗೂ ವೇಳೆಯಲ್ಲಿ ಸ್ವೀಕರಿಸಲಾಗುವುದು.

| ಕ್ರ. ಸಂ. | ಸರಬರಾಜು ಮಾಡಬೇಕಾದ ವಸ್ತುಗಳು | ಟೆಂಡರ್ ನಿಗದಿಪಡಿಸಿದ ದಿನಾಂಕ ಹಾಗೂ ಸಮಯ | ಟೆಂಡರ್ ಕರೆಯುವ ದಿನಾಂಕ ಹಾಗೂ ವೇಳೆ |
|---|---|---|---|
| 1) | ಆಹಾರ ಪದಾರ್ಥಗಳು (ಅಕ್ಕಿ ಮತ್ತು ಸಕ್ಕರೆಯನ್ನು ಹೊರತುಪಡಿಸಿ) | 25-5-2004 1.00 ಮಧ್ಯಾಹ್ನ | 25-5-2004 3.30 ಮಧ್ಯಾಹ್ನ |
| 2) | ಪ್ರಥಮ ದರ್ಜೆ ಬ್ರೆಡ್ (ಸಮವಾಗಿ ಹೋಳು ಮಾಡಿದ ಕಾಗದದಲ್ಲಿ ಸುತ್ತಿದ್ದು) | - " - | - " - |
| 3) | ಆಸ್ಪತ್ರೆಯ ಅವಶ್ಯ ವಸ್ತುಗಳು | - " - | - " - |

ಇಚ್ಛೆಯುಳ್ಳ ಟೆಂಡರ್‌ದಾರರು ಪ್ರತಿಯೊಂದು ಐಟಂಗೆ ನಿಗದಿತ ನಮೂನೆ 4 ಪ್ರತಿಗಳಲ್ಲಿ ನಿಗದಿಪಡಿಸಿರುವ ದಿನಾಂಕ ಮತ್ತು ವೇಳೆಗೆ ಟೆಂಡರನ್ನು ಸಲ್ಲಿಸತಕ್ಕದ್ದು.

ಮುದ್ರಿತ ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಒಂದು ಪ್ರತಿಗೆ ರೂ.5.00 ರಂತೆ 4 ಪ್ರತಿಗಳಿಗೆ ರೂ.20.00 ಗಳನ್ನು ಪಾವತಿಸಿ ದಿನಾಂಕ:24.5.2004 ರವರೆಗೆ ಕಛೇರಿಯಲ್ಲಿ ಪಡೆಯಬಹುದು. ಒಂದೊಂದು ಐಟಂಗೂ ಪ್ರತ್ಯೇಕವಾಗಿ ಫಾರಂಗಳನ್ನು ಪಡೆಯತಕ್ಕದ್ದು. ಇದಕ್ಕೆ ಸಂಬಂಧಿಸಿದಂತೆ ಎಲ್ಲಾ ಷರತ್ತು ಹಾಗೂ ಇನ್ನಿತರ ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಪಡೆಯಬಹುದು.

ಕೆಳಗೆ ಕಾಣಿಸಿದ ದಾಖಲೆಗಳನ್ನು ಟೆಂಡರ್ ಜೊತೆಗೆ ಲಗತ್ತಿಸಬೇಕು.

1) ಟೆಂಡರ್ ಒಪ್ಪಂದದ ಹಾಗೂ ಟೆಂಡರ್ ನಿಬಂಧನೆಗಳನ್ನು ಹಾಗೂ ಕರಾರಿನ ನಿಯಮಗಳನ್ನು ಓದಿ ಅರ್ಥ ಮಾಡಿಕೊಂಡಿರುತ್ತೇವೆ ಮತ್ತು ಅದರಂತೆ ನಡೆದುಕೊಳ್ಳುತ್ತೇವೆ ಎಂಬುದಾಗಿ ದೃಢೀಕರಣ ನೀಡತಕ್ಕದ್ದು.

2) ಇ.ಎಂ.ಡಿ. ಟೆಂಡರ್ ಮೊತ್ತದ ಶೇ.5 ರಂತೆ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಅಧೀಕ್ಷಕರು, ಸಿ.ಜಿ. ಆಸ್ಪತ್ರೆ ದಾವಣಗೆರೆ ಇವರ ಹೆಸರಿನಲ್ಲಿ ಪಡೆದ ಡಿ.ಡಿ. ಅಥವಾ ಎಸ್.ಬಿ.ಎಂ.ನಲ್ಲಿ ಹಣ ಪಾವತಿಸಿದ ಮೂಲ ಚಲನ್‌ನ್ನು ಲಗತ್ತಿಸಬೇಕು.

3) ಟೆಂಡರ್ ಮೊತ್ತದ ಶೇ.25 ರಷ್ಟು ಸಾಲ್ವೆನ್ಸಿ ಸರ್ಟಿಫಿಕೇಟನ್ನು ರೆವಿನ್ಯೂ ಅಧಿಕಾರಿಗಳಿಂದ ಯೋಗ್ಯತಾ ಪತ್ರವನ್ನು ಪಡೆದಿರಬೇಕು. ಅಥವಾ ಸಹಕಾರಿ ಸಂಸ್ಥೆಗಳ ರಿಜಿಸ್ಟ್ರಾರ್‌ರವರಿಂದ ಅಥವಾ ಬ್ಯಾಂಕಿನಿಂದ ಉತ್ತಮ ಆರ್ಥಿಕ ಸ್ಥಿತಿಯ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಜಂಟಿ ಸಾಲ್ವೆನ್ಸಿ ಯೋಗ್ಯತಾ ಪತ್ರವನ್ನು ಪರಿಗಣಿಸಲಾಗುವುದಿಲ್ಲ.

4) ಟೆಂಡರ್ ಸಲ್ಲಿಸುವ ಹಿಂದಿನ ಮೂರು ವರ್ಷಗಳ ಅವಧಿಯ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಕಟ್ಟಿದ್ದಕ್ಕೆ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

5) ದರ ಮತ್ತು ಬೆಲೆಗಳನ್ನು ಅಂಕಿಯಲ್ಲಿ ಮತ್ತು ಅಕ್ಷರಗಳಲ್ಲಿ ವಿವರವಾಗಿ ಮತ್ತು ಸರಿಯಾಗಿ ನಮೂದಿಸಬೇಕು.

6) ಯಶಸ್ವಿ ಟೆಂಡರ್‌ದಾರರು ಟೆಂಡರ್ ಮೊತ್ತದ ಶೇ. 10 ರಷ್ಟು (ಶೇ. 5 ರಷ್ಟು ಸಹಕಾರ ಸಂಘಗಳಿಗೆ) ನಿಶ್ಚಿತ ಭದ್ರತಾ ಠೇವಣಿ ಸಲ್ಲಿಸತಕ್ಕದ್ದು ಮತ್ತು ರೂ.100 ಬೆಲೆಯ ಸ್ಟಾಂಪ್‌ಡ್ ಪೇಪರ್‌ನಲ್ಲಿ ಒಪ್ಪಂದ ಪತ್ರವನ್ನು ಸಲ್ಲಿಸತಕ್ಕದ್ದು.

7) ಸೂಚಿಸಿರುವ ಕಾಲ ಮತ್ತು ದಿನಾಂಕವನ್ನು ಮೀರಿ ಬಂದ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

8) ಟೆಂಡರ್ ಅವಧಿಯಲ್ಲಿ ಯಾವುದೇ ಆಹಾರ ಪದಾರ್ಥಗಳ ಮತ್ತು ಬ್ರೆಡ್ಡಿನ ದರದಲ್ಲಿ ವ್ಯತ್ಯಾಸವಾದರೆ ಟೆಂಡರ್ ದರವನ್ನು ಬಿಟ್ಟು ವ್ಯತ್ಯಾಸದ ದರವನ್ನು ಹೊಂದಲು ವಿಜೇತರಾದ ಟೆಂಡರ್‌ದಾರರು ಅರ್ಹರಾಗಿರುವುದಿಲ್ಲ. ಈ ನಿಬಂಧನೆಯನ್ನು ಸಹ ಒಪ್ಪಂದ ಪತ್ರದಲ್ಲಿ ನಮೂದಿಸಬೇಕು.

9) ಪ್ರತಿ ತಿಂಗಳು ಟೆಂಡರ್‌ದಾರರಿಂದ ಶೇ.2 ರಂತೆ ಆದಾಯ ತೆರಿಗೆಯನ್ನು ಪ್ರತಿ ತಿಂಗಳ ಬಿಲ್ಲಿನಲ್ಲಿ ಕಟಾವು ಮಾಡಲಾಗುವುದು.

10) ಟೆಂಡರ್ ಫಾರಂನಲ್ಲಿ ನಮೂದಿಸಿದ ಎಲ್ಲಾ ನಿಬಂಧನೆಗಳನ್ನು ಅನುಸರಿಸತಕ್ಕದ್ದು.

11) ಯಾವುದೇ ಕಾರಣ ಕೊಡದೆ ಟೆಂಡರನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಅಧೀಕ್ಷಕರು, ಜಿಲ್ಲಾ ಆಸ್ಪತ್ರೆ ದಾವಣಗೆರೆ ಇವರಿಗೆ ಕಾಯ್ದಿರಿಸಲ್ಪಟ್ಟಿದೆ.

12) ಬೇಕರಿ ಲೈಸನ್ಸ್ ಚಾಲ್ತಿಯಲ್ಲಿರುವ ಬಗ್ಗೆ ಲೈಸನ್ಸ್ ಪ್ರತಿಯನ್ನು ಲಗತ್ತಿಸಿರಬೇಕು.

13) ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ ದಪ್ಪ ಅಕ್ಷರಗಳಲ್ಲಿ ಯಾವ ಪೂರೈಕೆಗಾಗಿ ಟೆಂಡರ್ ಸಲ್ಲಿಸಲಾಗಿದೆ ಎಂಬುದನ್ನು ಬರೆಯಬೇಕು.

14) ಮೊದಲನೆ ಕವರಿನಲ್ಲಿ ಇ.ಎಂ.ಡಿ ಹಾಗೂ ಇತರೆ ದಾಖಲೆಗಳು ಎರಡನೇ ಕವರಿನಲ್ಲಿ ಗುತ್ತಿಗೆದಾರರಿಂದ ಸಹಿ ಮಾಡಲ್ಪಟ್ಟ (ನಾಲ್ಕು ಪ್ರತಿಗಳು) ದರಪಟ್ಟಿಗಳ ನಮೂದನೆ.

15) ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವ ಸಹಕಾರ ಸಂಘಗಳು ಪ್ರಚಲಿತ ಮಾರುಕಟ್ಟೆ ದರಕ್ಕಿಂತ ಹೆಚ್ಚಾಗಿರಕೂಡದು.

16) ಟೆಂಡರ್‌ಗಳಲ್ಲಿನ ಮೊತ್ತವನ್ನು ತಿದ್ದಬಾರದು. ತಪ್ಪಾಗಿದ್ದಲ್ಲಿ ಅದನ್ನು ಹೊಡೆದು ಹಾಕಿ ಪಕ್ಕದಲ್ಲಿ ಅಂಕಿ ಮತ್ತು ಅಕ್ಷರಗಳಲ್ಲಿ ಬರೆದು ಸಹಿ ಮಾಡತಕ್ಕದ್ದು. ತಪ್ಪಿದಲ್ಲಿ ಅದನ್ನು ತಿರಸ್ಕರಿಸಲಾಗುವುದು.

17) ಗುತ್ತಿಗೆ ಅವಧಿಯಲ್ಲಿ ಪದಾರ್ಥಗಳನ್ನು ಸರಬರಾಜು ಮಾಡುವ ಬಗ್ಗೆ ಅಥವಾ ಗುಣಮಟ್ಟ ಸರಿಯಾಗಿಲ್ಲದ ಪಕ್ಷದಲ್ಲಿ ಅತೃಪ್ತಿ ಕಂಡು ಬಂದರೆ ಗುತ್ತಿಗೆ ಅವಧಿಯು ಮುಗಿಯುವ ಮೊದಲೇ ಅಥವಾ ಯಾವಾಗಲಾದರೂ ಒಂದು ತಿಂಗಳ ಮುಂಚಿತವಾಗಿ ಸೂಚನೆ ನೀಡಿ ಗುತ್ತಿಗೆಯನ್ನು ವಜಾ ಮಾಡುವ ಹಕ್ಕನ್ನು ಈ ಕಛೇರಿ ಹೊಂದಿರುತ್ತದೆ.

18) ಗುತ್ತಿಗೆದಾರರು ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಹಿಂದಿನ ತಿಂಗಳ ಬಿಲ್ಲನ್ನು ದೃಢೀಕರಿಸಿ ಪಾವತಿಗಾಗಿ ಸಲ್ಲಿಸತಕ್ಕದ್ದು.

19) ಗುತ್ತಿಗೆದಾರರು ಮುಂದಿನ ಸರ್ಕಾರಿ ಕಾನೂನುಗಳಿಗೆ ಬದ್ದರಾಗಿರಬೇಕು.
20) ಅಂಗೀಕೃತವಾದ ದರಕ್ಕಿಂತ ಹೆಚ್ಚುವರಿ ದರಕ್ಕೆ ಗುತ್ತಿಗೆದಾರರಿಂದ ಯಾವುದೇ ಮನವಿ ಪತ್ರವನ್ನು ಸ್ವೀಕರಿಸುವುದಿಲ್ಲ. ಒಂದು ವೇಳೆ ಸಲ್ಲಿಸಿದ ಪಕ್ಷದಲ್ಲಿ ಅದು ಸ್ವಯಂ ತಿರಸ್ಕೃತ ಎಂದು ಪರಿಗಣಿಸಲಾಗುವುದು.
21) ಆಸ್ಪತ್ರೆಗಳಿಗೆ : ಇತರೆ ಸಂಸ್ಥೆಗಳಿಗೆ ಸರಬರಾಜು ಮಾಡಿರುವ ಬಗ್ಗೆ ಅನುಭವ ದೃಢೀಕರಿಸಿದ ಪ್ರಮಾಣ ಪತ್ರ ನೀಡುವುದು. ಪ್ರತಿಯನ್ನು ಲಗತ್ತಿಸತಕ್ಕದ್ದು.
22) ಆಹಾರ ಪದಾರ್ಥಗಳಿಗೆ ಪ್ರತಿ ಮಾಹೆ ದರವನ್ನು ನೀಡುವಾಗ ಎ.ಪಿ.ಎಂ.ಸಿ. ಸಂಸ್ಥೆಯ ಅಧಿಕಾರಿಗಳಿಂದ ದೃಢೀಕರಿಸಿರಬೇಕು. ಸದರಿ ವಸ್ತುಗಳಿಗೆ ತಮ್ಮ ಸಂಸ್ಥೆಯಿಂದ ಶೇಕಡ ಎಷ್ಟು ರಿಯಾಯಿತಿ ನೀಡಲಾಗುವುದು ಎಂಬುದನ್ನು ನಮೂದಿಸತಕ್ಕದ್ದು.
23) ಆಸ್ಪತ್ರೆಯ ಅವಶ್ಯಕ ವಸ್ತುಗಳ ಬೆಲೆಗಳು ಎಂ.ಆರ್.ಪಿ. ದರಕ್ಕಿಂತ ಹೆಚ್ಚಾಗಿರಕೂಡದು.
24) ಇ.ಎಂ.ಡಿ. ಹಣವನ್ನು ಪಾವತಿಸುವುದಕ್ಕೆ ರಿಯಾಯಿತಿ ಇರುವ ಸಹಕಾರ ಸಂಘ ಸಂಸ್ಥೆಗಳು ಸರ್ಕಾರಿ ಆದೇಶವನ್ನು ಲಗತ್ತಿಸಬೇಕು.
25) ಸಂಬಂಧಪಟ್ಟ ಸರ್ಕಾರಿ ಇಲಾಖೆಗಳಲ್ಲಿ ನೊಂದಣಿ ಮಾಡಿಸಿದ ನೊಂದಣಿ ಪ್ರಮಾಣ ಪತ್ರವನ್ನು ದೃಢೀಕರಿಸಿದ ಪ್ರತಿಯನ್ನು ಲಗತ್ತಿಸಬೇಕು.
26) ವರಮಾನ ತೆರಿಗೆ ಪಾವತಿಸಿರುವ ಪ್ರಮಾಣ ಪತ್ರಗಳು ಅಥವಾ ವಿನಾಯಿತಿ ಇದ್ದರೆ ವಿನಾಯಿತಿ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
27) ತಾಜಾ ಬ್ರೆಡ್ಡನ್ನು 400 ಗ್ರಾಂ, 800 ಗ್ರಾಂನ ಪ್ಯಾಕೇಟ್‌ಗಳಲ್ಲಿ ಸರಬರಾಜು ಮಾಡತಕ್ಕದ್ದು. ಪ್ರತಿ ಕೆ.ಜಿ.ಯ ದರ ನಮೂದಿಸತಕ್ಕದ್ದು. ಪ್ಯಾಕೆಟ್ ಮೇಲೆ ಸಿ.ಜಿ. ಆಸ್ಪತ್ರೆ ದಾವಣಗೆರೆ ಎಂದು ನಮೂದಿಸಬೇಕು.
28) ಮಾರಾಟ ತೆರಿಗೆ ಇರುವಂತಹ ಪದಾರ್ಥಗಳಿಗೆ ತೆರಿಗೆ ಸೇರಿ ದರ ನಮೂದಿಸತಕ್ಕದ್ದು.
29) ಒಂದು ಮೊಟ್ಟೆ 45 ಗ್ರಾಂ ನಿಂದ 57 ಗ್ರಾಂ ವರೆಗೆ ಸರಬರಾಜು ಮಾಡತಕ್ಕದ್ದು.
30) ಗುತ್ತಿಗೆದಾರರು ಬೆಳಿಗ್ಗೆ 6.30 ಗಂಟೆಗೆ ಸರಿಯಾಗಿ ಆಹಾರ ಪದಾರ್ಥಗಳು ಬ್ರೆಡ್, ಮೊಟ್ಟೆ ಮತ್ತು ಆಸ್ಪತ್ರೆಯ ಅವಶ್ಯಕ ವಸ್ತುಗಳನ್ನು ಹಾಗೂ ಇತರೆ ವಸ್ತುಗಳನ್ನು ಸರಬರಾಜು ಮಾಡತಕ್ಕದ್ದು.
31) ವಾರ್ಷಿಕ ವಹಿವಾಟು ವರ್ಷಕ್ಕೆ ಕನಿಷ್ಟ 15.00 ಲಕ್ಷ ರೂಪಾಯಿಗಳಷ್ಟು ಇರತಕ್ಕದ್ದು.
32) ಕಾನೂನು ವ್ಯಾಪ್ತಿ ದಾವಣಗೆರೆ ಜಿಲ್ಲೆಗೆ ಒಳಪಟ್ಟಿರುತ್ತದೆ.
33) ಸದರಿ ಗುತ್ತಿಗೆಯನ್ನು ಮುಂದೆ 6 ತಿಂಗಳಿಗೂ ಮೀರದಂತೆ ಅಥವಾ ಮುಂದಿನ ಗುತ್ತಿಗೆಯನ್ನು ನಿಗದಿಪಡಿಸುವವರೆಗೂ ಯಾವುದು ಮುಂದೋ ಅಲ್ಲಿಯವರೆಗೆ ಸದರಿ ನಿಬಂಧನೆಗಳು ಮತ್ತು ದರಗಳು ಹಾಗೂ ಷರತ್ತುಗಳಿಗೆ ಒಳಪಟ್ಟು ಗುತ್ತಿಗೆದಾರರ ಒಪ್ಪಂದದ ಮೇರೆಗೆ ಗುತ್ತಿಗೆಯನ್ನು ಮುಂದುವರೆಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.
34) ಮುಷ್ಕರ, ಗಲಭೆ ಹಾಗೂ ಇತ್ಯಾದಿಗಳ ಸಮಯದಲ್ಲಿ ತಾವೇ ಪರ್ಯಾಯ ವ್ಯವಸ್ಥೆ ಮಾಡಿ ಆಸ್ಪತ್ರೆಯ ರೋಗಿಗಳಿಗೆ ತೊಂದರೆಯಾಗದಂತೆ ಸರಬರಾಜು ಮಾಡತಕ್ಕದ್ದು.
35) ಪ್ರತಿ ತಿಂಗಳು ಬೇಡಿಕೆಗೆ ಅನುಗುಣವಾಗಿ ಆಹಾರ ಪದಾರ್ಥ, ಬ್ರೆಡ್, ಮೊಟ್ಟೆ ಮತ್ತು ಆಸ್ಪತ್ರೆಯ ಅವಶ್ಯಕ ವಸ್ತುಗಳನ್ನು ಹಾಗೂ ಇತರೆ ವಸ್ತುಗಳನ್ನು ಸರಬರಾಜು ಮಾಡತಕ್ಕದ್ದು.
36) ಗುತ್ತಿಗೆ ಪಡೆಯಲು ಅನರ್ಹವಾದ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ದರ ಗುತ್ತಿಗೆ ನಿಗದಿಪಡಿಸಿದ ನಂತರ ಹಿಂದಿರುಗಿಸಲಾಗುವುದು.
37) ಗುತ್ತಿಗೆದಾರರು ಅವಧಿ ಮುಗಿಯುವವರೆಗೆ ಗುತ್ತಿಗೆಯನ್ನು ಬೇರೆಯವರಿಗೆ ವರ್ಗಾಯಿಸುವಂತಿಲ್ಲ.
38) ಆಸ್ಪತ್ರೆಯ ಅವಶ್ಯಕ ವಸ್ತುಗಳು ಎಂ.ಆರ್.ಪಿ. ದರಕ್ಕಿಂತ ಹೆಚ್ಚಾಗಿರಕೂಡದು. ಪ್ರತಿ ವಸ್ತುವಿನ ಬೆಲೆ ನಮೂದಿಸತಕ್ಕದ್ದು. ಮತ್ತು ಐ.ಎಸ್.ಐ. ಮಾರ್ಕ್ ಹೊಂದಿರಬೇಕು.
39) ಎಲ್ಲಾ ನಿಬಂಧನೆಗಳನ್ನು ಟೆಂಡರ್ ಫಾರಂನಲ್ಲಿ ನಮೂದಿಸಲಾಗಿದೆ.

ಅಧೀಕ್ಷಕರು, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ.

## ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ

ಮೊದಲನೆ ಲಕೋಟೆಯಲ್ಲಿ ಈ ಕೆಳಕಂಡ ದೃಢೀಕರಿಸಿದ ದಾಖಲೆಗಳನ್ನು ದ್ವಿ ಪ್ರತಿಯಲ್ಲಿ ಸಲ್ಲಿಸತಕ್ಕದ್ದು.

(ಮೊದಲನೇ ಲಕೋಟೆಯಲ್ಲಿ ದಾಖಲೆಗಳೊಂದಿಗೆ ಹಾಗೂ ಮಾಹಿತಿಯು ಸರಿಯಾಗಿದ್ದರೆ ಮಾತ್ರ ಪೂರ್ಣ ದರ ಸಲ್ಲಿಸಿರುವ ಎರಡನೇ ಲಕೋಟೆಯನ್ನು ತೆರೆಯಲಾಗುವುದು)

**ಮೊದಲನೆಯ ಕವರಿನಲ್ಲಿ ಇಡಬೇಕಾದ ದಾಖಲೆಗಳು**

1) ನೊಂದಾಯಿತ ಸಹಕಾರ ಸಂಘಗಳು : ಸರ್ಕಾರಿ ಸಹಕಾರ ಸಂಘ ಸಂಸ್ಥೆಗಳ ಹೆಸರು : ವಿಳಾಸ,
2) ಅಗತ್ಯ ಸಂದರ್ಭದಲ್ಲಿ ದಾವಣಗೆರೆಯಲ್ಲಿ ಸಂಪರ್ಕಿಸಲು ಸಂಸ್ಥೆಯ ಮುಖ್ಯ ವ್ಯಕ್ತಿಯ ಹೆಸರು, ಹುದ್ದೆ ವಿಳಾಸ ಮತ್ತು ದೂರವಾಣಿ ಸಂಖ್ಯೆ,
3) ಕೋ-ಆಪರೇಟಿವ್ ಸೊಸೈಟಿ ಕಾಯ್ದೆ ಅನ್ವಯ ನೊಂದಣಿ ಪ್ರಮಾಣ ಪತ್ರ (ನೊಂದಣೀಕರಿಸಿದ ದಿನಾಂಕವು ಟೆಂಡರ್ ಪ್ರಕಟಣೆ ದಿನಾಂಕದಿಂದ 5 ವರ್ಷ ಅಥವಾ ಅದಕ್ಕಿಂತಲೂ ಮೇಲ್ಪಟ್ಟಿರಬೇಕು)

4) ಇತ್ತೀಚಿನ 2000-01, 2001-02 ಮತ್ತು 2002-03ರ ವರಮಾನ ತೆರಿಗೆ ಪಾವತಿ ಪತ್ರ (ಸಂಸ್ಥೆ ಹೆಸರಿನಲ್ಲಿ ಪಾವತಿಸಿರುವ ಪತ್ರ ಸಲ್ಲಿಸತಕ್ಕದ್ದು),
5) ಟೆಂಡರ್ ಮೊತ್ತಕ್ಕೆ ಶೇ.25ರಂತೆ ಬ್ಯಾಂಕಿನಿಂದ ಪಡೆದ (ಸಾಲ್ವೆನ್ಸಿ) ಪ್ರಮಾಣ ಪತ್ರ (ಅಧೀಕ್ಷಕರು, ಚಿಗಟೇರಿ ಜಿಲ್ಲಾ ಆಸ್ಪತ್ರೆ ಇವರ ಹೆಸರಿನಲ್ಲಿ)
6) ಇತ್ತೀಚಿನ ಮಾರಾಟ ತೆರಿಗೆ ಪಾವತಿ ಪ್ರಮಾಣ ಪತ್ರ ಹಾಗೂ ನೊಂದಣಿ ಮಾಡಿರುವ ಪ್ರಮಾಣ ಪತ್ರವನ್ನು ಲಗತ್ತಿಸುವುದು.
7) ಇ.ಎಂ.ಡಿ. ಟೆಂಡರ್ ಮೊತ್ತಕ್ಕೆ ಶೇ.5 ರಂತೆ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಅಧೀಕ್ಷಕರು, ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ ಇವರ ಹೆಸರಿನಲ್ಲಿ ಪಡೆದ ಡಿ.ಡಿ. ಅಥವಾ ಎಸ್.ಬಿ.ಎಂ.ನಲ್ಲಿ ಹಣ ಪಾವತಿಸಿದ ಮೂಲ ಚಲನ್ ಲಗತ್ತಿಸತಕ್ಕದ್ದು. (ವಿನಾಯಿತಿ ಪಡೆದಿದ್ದರೆ ದೃಢೀಕರಣ ಪ್ರಮಾಣ ಪತ್ರ ಲಗತ್ತಿಸತಕ್ಕದ್ದು)
8) ಸಹಕಾರ ಸಂಘಗಳ ಇಲಾಖೆಯವರಿಂದ ಹಿಂದಿನ ಮೂರು ವರ್ಷಗಳ ದೃಢೀಕರಿಸಿದ ಲೆಕ್ಕ ಪರಿಶೋಧನಾ ವರದಿ ಅಥವಾ ಆಡಿಟರ್ ಲೆಕ್ಕ ಪರಿಶೋಧನಾ ವರದಿ,
9) ಹಿಂದಿನ 5 ವರ್ಷಗಳ ಅವಧಿಯ ಬೇಕರಿ ಪದಾರ್ಥ ತಯಾರಿಸುವ ಪರವಾನಗಿ ಪತ್ರ ಸಂಬಂಧಪಟ್ಟ ಪ್ರಾಧಿಕಾರದಿಂದ (ಟೆಂಡರ್ ಪ್ರಕಟಿಸಿದ ದಿನಾಂಕದಿಂದ) (ಬ್ರೆಡ್ ಟೆಂಡರ್‌ದಾರರು ಮಾತ್ರ ಸಲ್ಲಿಸಬೇಕು)
10) ಆಸ್ಪತ್ರೆಗಳಿಗೆ : ಇತರೆ ಸಂಸ್ಥೆಗಳಿಗೆ ಸರಬರಾಜು ಮಾಡಿರುವ ಬಗ್ಗೆ ಅನುಭವ ದೃಢೀಕರಿಸಿದ ಪ್ರಮಾಣ ಪತ್ರ ನೀಡುವುದು. ಪ್ರತಿಯನ್ನು ಲಗತ್ತಿಸತಕ್ಕದ್ದು.
11) ಎರಡನೇ ಲಕೋಟೆಯಲ್ಲಿ ಗುತ್ತಿಗೆದಾರರಿಂದ ಸಹಿ ಮಾಡಲ್ಪಟ್ಟ ದರಪಟ್ಟಿಗಳ 4 ಪ್ರತಿಗಳನ್ನು ಇಡತಕ್ಕದ್ದು.

ಪಿ.ಡಿ. 40 ಅಧೀಕ್ಷಕರು, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ.

**IN THE COURT OF THE PRINCIPAL DISTRICT JUDGE AT TUMKUR**

**P & S.C. No. 6/2003**

**Petitioners:** 1. Sri B. Vazeer Sab and others,

- Vs -

**Respondents:**
1. Smt. Rafath Jabeen, W/o Late V.M. Mirza Rehan Pasha, Aged about 40 years,
2. Saleem Pasha, S/o Late V.M. Mirza Rehan Pasha, aged about 14 years.
3. Miss Irfath, D/o Late V.M. Mirza Rehan Pasha, aged about 8 years, 2 & 3 are since minors, represented by their mother next friend guardian, Smt. Rafath Jabeen, Residing at Behind 'Isra Shadi Mahal', 4th Cross, Sadashiva Nagar, Tumkur.
4. The General Manager, (Admn.,) Bangalore Telecom B.S.N.L. Telephone House, Bangalore-560 001
5. The Welfare Officer, Bangalore Telecom. B.S.N.L.Telephone House, Bangalore-560 001.
6. The Accounts Officer, (A & P), Office of the General Manager (Central), B.S.N.L. Telecom Building, Bangalore-560 001.
7. The Chairman/Managing Director, Bharath Sanchar Nigam Limited, Sanchar House, New Delhi.
8. The Secretary to the Department of Communications/Telecommunications Government of India, Sanchar House, New Delhi.
9. The Post Master General, Office of the Post Master General, G.P.O. Bangalore-560 001.

**PUBLIC NOTICE**

It is hereby notified that the above petition is filed to get the Succession Certificate Under Section 372 of the Indian Succession Act 1925, read with Sections 63 and 65 of the Hanafi Law of inheritance under Mahomedan Law, for the Schedule Movables i.e., the emoluments and benefits that accrue to the Petitioners and the Respondents 1 to 3 on account of death of Deceased V.M. Mirza Rehan Pasha S/o B. Vazeer Sab, who was working as Junior Telecom Officer, B.S.N.L. Bangalore. If any other person/persons who claim to be the legal representative/s of the deceased V.M. Mirza Rehan Pasha other than the petitioners and the Respondents 1 to 3 may appear either in person or through their counsel with proper application and objections within One Month from the date of publication of this notice before the Hon'ble Court.

**SCHEDULE**

| | | |
|---|---|---|
| 1. | Death-cum-Retirement Gratuity | Rs. 2,33,475.00 |
| 2. | Leave Encashment | Rs. 59,982.00 |
| 3. | General Provident Fund | Rs. 10,348.00 |
| 4. | C.G.E.I.S. refund | Rs. 44,088.00 |
| | **Total** | **Rs. 3,47,893.00** |

And 5.Family Pension at Rs.4,050-00 per month at enhanced rate up to 7 years with effect from 15.02.2003 and Rs. 2,430-00 per month at normal rate with effect from 15.02.2010. Along with the sum assured if any under the Postal Life Insurance Policies, the details have not been furnished by the Respondents 1 to 3 or 4 to 9 so far.

The objections received after the said date and time, will not be considered.

This notice is given as per the orders of this Court made on this the 13th day of April 2004 under the Seal and Signature of this Court.

By Order of the Court,

P.D. 41 **K.S. KRISHNAMURTHY**

Chief Administrative Officer, District and Sessions Court, Tumkur.

**FORM - I**

**(See Rule - 9)**

**Office of the Director General of Police, Commandant General, Home Guards and Director of Civil Defence and Fire Services**

**NOTIFICATION Dated: 18th January 2003**

ಕರ್ನಾಟಕ ರಾಜ್ಯ ಅಗ್ನಿ ಶಾಮಕ ಸೇವಾ ಇಲಾಖೆಯ, ರಾಯಚೂರು ಜಿಲ್ಲಾ ಅಗ್ನಿಶಾಮಕ ಠಾಣೆಯಲ್ಲಿ ಅಗ್ನಿಶಾಮಕ ಚಾಲಕ-ಸಂ.1759 ಆಗಿ ಕಾರ್ಯನಿರ್ವಹಿಸುತ್ತಿರುವ **ಶ್ರೀ ಚಂದ್ರಕಾಂತ್ ಗಣಪತಿ ಹರಿಜನರವರ** ಹೆಸರನ್ನು **ಚಂದ್ರಕಾಂತ್** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

Director General of Police, Commandant General, Home Guards and

P.D. 93 Director of Civil Defence and Fire Services.

ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು-೦೩

ಟೆಂಡರ್-ಕಂ-ಹರಾಜು ಪ್ರಕಟಣೆ

ಸಂಖ್ಯೆ:ಎ೨(ಎ).ಬಿಯುಡಿ.ಸಿಆರ್-8961/03-04, ದಿನಾಂಕ: 15ನೇ ಏಪ್ರಿಲ್ 2004

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಬೆಂಗಳೂರು ನಗರ ವಿಭಾಗದ ಕೆ.ಆರ್.ಪುರಂ ವಲಯದ ವ್ಯಾಪ್ತಿಗೆ ಸಂಬಂಧಿಸಿದ ಬೆಂಗಳೂರು ಆನೇಕಲ್ ಬನ್ನೇರುಘಟ್ಟ ರಸ್ತೆಯನ್ನು ನಾಲ್ಕು ಪಥದ ರಸ್ತೆಯನ್ನಾಗಿ ಪರಿವರ್ತಿಸಿ ಅಭಿವೃದ್ಧಿ ಪಡಿಸುವ ಕಾಮಗಾರಿಗೆ ಅಡ್ಡಬರುವ ಮರಗಳನ್ನು ಕಡಿದು ತೆಗೆಯಲು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇ ಮಾಡಲು ತೀರ್ಮಾನಿಸಲಾಗಿದ್ದು ಈ ಕೆಳಕಾಣಿಸಿದ ಅನುಸೂಚಿಯ ದಿನಾಂಕದಂದು ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಂದ ಟೆಂಡರ್-ಕಂ-ಬಹಿರಂಗ ಹರಾಜು ಮಾಡಲಾಗುವುದು.

| ಕ್ರ. ಸಂ. | ಟೆಂಡರ್-ಕಂ-ಹರಾಜು ನಡೆಯುವ ಸ್ಥಳ | ಲಾಟ್ ನಂ. | ಟೆಂಡರ್-ಕಂ-ಹರಾಜಿನ ದಿನಾಂಕ ಟೆಂಡರ್ ಸ್ವೀಕರಿಸುವ ಮತ್ತು ಟೆಂಡರ್ ಕಂ ಹರಾಜಿನ ವೇಳೆ | ಪ್ರಸ್ತುತ ಮರ ಇರುವ ಸ್ಥಳ | ಮಾರಾಟಕ್ಕೆ ಇಡಲಾಗಿರುವ ಮರದ ಜಾತಿಯ ವಿವರ ಹಾಗೂ ಮರಗಳ ಸಂಖೆ | ಹರಾಜಿಗೆ ಪ್ರಸ್ತಾಪಿಸಿದ ದೊರೆಯ ಬಹುದಾದ ಸೌದೆ/ ಟಿಂಬರ್ ಅಂದಾಜು ಟನ್‌ಗಳಲ್ಲಿ |
|---|---|---|---|---|---|---|
| ೧ | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಅರಣ್ಯ ಭವನ ೧೮ನೇ ಕ್ರಾಸ್, ಮಲ್ಲೇಶ್ವರಂ ಬೆಂಗಳೂರು | | ದಿನಾಂಕ: ೧೦.೫.೦೪ ರಂದು ಮದ್ಯಾಹ್ನ ೩.೦೦ ಗಂಟೆಗೆ ಟೆಂಡರ್ ಸ್ವೀಕರಿಸಲಾಗುವುದು. ನಂತರ ೪.೩೦ ರಿಂದ ಹರಾಜು ನಡೆಸ ಲಾಗುವುದು | ಬೆಂಗಳೂರು ಆನೇಕಲ್ ಬನ್ನೇರುಘಟ್ಟ ರಸ್ತೆ ಕಿ.ಮಿ. ೯.೭೦ ರಿಂದ ೧೧ರವರೆಗೆ ಎಡಬದಿ ಮತ್ತು ಬಲಬದಿ ಸೇರಿ | ರೈನ್ ಟ್ರೀ, ನೀಲಗಿರಿ, ಫೆಲ್ಟೋ ಫಾರಂ, ಸಿಸ್ಸು, ಅತ್ತಿ ಅಕೇಶಿಯಾ, ಕಾಡು ಬಾದಾಮಿ ಇತ್ಯಾದಿ ಮರಗಳ ಸಂಖ್ಯೆ: ೩೪ ರಿಂದ ೪೨ ಮರಗಳು ಹಾಗೂ ೧ ರಿಂದ ೨೦ | ಸೌದೆ ೦೯.೭೧ ಟನ್ ಟಿಂಬರ್ ೨-೨೬ ಫ.ಮಿ. ಸೌದೆ ೧೮-೧೫ ಟನ್ ಟಿಂಬರ್ ೧-೭೭ ಘ.ಮಿ. |
| ೨ | | | | ಬೆಂಗಳೂರು ಆನೇಕಲ್ ಬನ್ನೇರುಘಟ್ಟ ರಸ್ತೆ ಕಿ.ಮಿ. ೧೧ ರಿಂದ ೧೨ರವರೆಗೆ ಎಡಬದಿ ಮತ್ತು ಬಲಬದಿ ಸೇರಿ | ಹೊಂಗೆ, ರೈನ್‌ಟ್ರೀ, ಆಕೇಶಿಯಾ, ಬಸವನಪಾದ, ಸ್ಪೈಥೋಡಿಯಾ, ಮಾವು, ಬ್ಯಾಲಾ, ಸಿಸ್ಸು, ಇತರೆ ಜಾತಿ ಸಂಖ್ಯೆ ೧ ರಿಂದ ೪೬ | ಟಿಂಬರ್– ಇಲ್ಲ ಸೌದೆ – ೪೯ ಟನ್ |
| ೩ | | | | ಬೆಂಗಳೂರು ಆನೇಕಲ್ ಬನ್ನೇರುಘಟ್ಟ ರಸ್ತೆ ಕಿ.ಮಿ. ೧೨ ರಿಂದ ೧೩ರವರೆಗೆ ಎಡಬದಿ ಮತ್ತು ಬಲಬದಿ ಸೇರಿ | ಬಸವನಪಾದ, ಅತ್ತಿ ಹಿಪ್ಪೆ, ಹೊಂಗೆ, ಮಳೆಮರ ನೇರಳೆ, ಫೆಲ್ಟೋಫಾರಂ, ಆಲ ಅರಳಿ, ಇತರೆ ಜಾತಿ ಸಂಖ್ಯೆ ೧ ರಿಂದ ೬೭ | ಟಿಂಬರ್–ಇಲ್ಲ ಸೌದೆ - ೩೬.೭೫ ಟನ್ |
| ೪ | | | | ಬೆಂಗಳೂರು ಆನೇಕಲ್ ಬನ್ನೇರುಘಟ್ಟ ರಸ್ತೆ ಕಿ.ಮಿ. ೧೩ ರಿಂದ ೧೩.೨೦ ರವರೆಗೆ ಮರಗಳ ಸಂಖ್ಯೆ ೧ ರಿಂದ ೬೨ ಎಡಬದಿ ಮತ್ತು ಬಲಬದಿ ಸೇರಿ | ನೀಲಗಿರಿ, ಹಲಸು, ನೇರಳೆ, ಸಿಸ್ಸು, ಗುಲ್‌ಮೋಹರ್, ನಾಗಲಿಂಗ, ಬನ್ನಿ, ಬೇವು, ಹೊಂಗೆ, ಇತ್ಯಾದಿ | ಸೌದೆ - ೩೧-೦೦ ಟನ್ ಟಿಂಬರ್ – ೬-೦೪ ಘ.ಮಿ. |

ಷರತ್ತುಗಳು

1. ಮೇಲ್ಕಾಣಿಸಿದ ಮರಗಳ ಪ್ರಮಾಣವು ಅಂದಾಜಿನ ಮೇಲೆ ನಿರ್ಧರಿಸಲಾಗಿದೆ.
2. ಈ ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರೂ ಪ್ರತಿ ಲಾಟ್‌ಗೆ ಟೆಂಡರ್ ಕಂ-ಹರಾಜಿನಲ್ಲಿ ಭಾಗವಹಿಸಲು ರೂ.5000/- ಗಳನ್ನು ನಗದು ರೂಪದಲ್ಲಿ ಅಥವಾ ಡಿ.ಡಿ. ರೂಪದಲ್ಲಿ ಮುಂಗಡ ಠೇವಣಿಯನ್ನು ಹರಾಜಿಗೆ ಮುನ್ನಾ ನೀಡತಕ್ಕದ್ದು.
3. ರೂ.200/- ಮತ್ತು ಇತರೆ ತೆರಿಗೆಗಳನ್ನು ಸಂದಾಯ ಮಾಡಿ ದಿನಾಂಕಃ 10.05.2004ರ ಮಧ್ಯಾಹ್ನ 1.00 ಗಂಟೆಯವರೆಗೆ ಈ ಕಛೇರಿಯಲ್ಲಿ ಟೆಂಡರ್ ಫಾರಂ ಪಡೆಯಬಹುದು. ಭರ್ತಿ ಮಾಡಿದ ಫಾರಂ ಮೇಲೆ ರೂ.2.00 ಕೋರ್ಟ್ ಫೀ ಸ್ಟಾಂಪ್‌ನ್ನು ಅಂಟಿಸತಕ್ಕದ್ದು, ಹಾಗೆಯೇ ಟೆಂಡರ್ ಫಾರಂ ಜೊತೆ 5000/- ಮೊಬಲಗಿನ ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಡಿ.ಡಿ.ಯನ್ನು ಪ್ರತಿ ಲಾಟ್‌ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದು ಇ.ಎಂ.ಡಿ. ಯಾಗಿ ಲಗತ್ತಿಸತಕ್ಕದ್ದು.
4. ಈ ಟೆಂಡರ್ ಕಂ ಹರಾಜನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.

5.(ಅ) ಒಪ್ಪಿಕೊಳ್ಳಲಾದ ಟೆಂಡರ್ ಕಂ ಹರಾಜಿನ ½ ಭಾಗ ಹಣವನ್ನು ಪೂರ್ಣವಾಗಿ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳೊಂದಿಗೆ ಸ್ಥಳದಲ್ಲಿ ಹರಾಜಿನ ದಿನದಂದೇ ಪಾವತಿ ಮಾಡಬೇಕು. ಇನ್ನು ಮಿಕ್ಕ ½ ಭಾಗ ಹಣವನ್ನು ಮರಗಳ ಕಟಾವಣೆ ಹಾಗೂ ಸಾಗಾಣಿಕೆಗೆ ಮಂಜೂರಾತಿ ನೀಡುವ ದಿನ ಅಥವಾ 15 ದಿನಗಳ ಅವಧಿಯ ಮುಂಚಿತವಾಗಿ ಪಾವತಿಸಬೇಕು. ಇಲ್ಲದಿದ್ದಲ್ಲಿ ಅವರ ಇಎಂಡಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆಯಲ್ಲದೆ ಸದರಿ ಬ್ಲಾಕಿನ ಮರಗಳನ್ನು ಅವರ ಜವಾಬ್ದಾರಿಯಲ್ಲಿ ಮರು ಟೆಂಡರ್ ಕಂ ಹರಾಜು ಮಾಡಲಾಗುವುದು.

5.(ಆ) ಹಾಲಿ ಚಾಲ್ತಿಯಲ್ಲಿರುವ ತೆರಿಗೆ ವಿವರ

ಮಾರಾಟವಾದ ಮೊತ್ತದ ಮೇಲೆ ಶೇ.8 ರಂತೆ ಅರಣ್ಯ ಅಭಿವೃದ್ಧಿ ತೆರಿಗೆಯನ್ನು ಸೇರಿಸಿ ಬಂದ ಮೊತ್ತಕ್ಕೆ ಈ ಕೆಳಕಂಡ ತೆರಿಗೆಗಳನ್ನು ಪಾವತಿಸಬೇಕಾಗುತ್ತದೆ.

| | | | |
|---|---|---|---|
| i. | ಮಾರಾಟ ತೆರಿಗೆ | - | 13% |
| ii. | ಮಾರಾಟ ತೆರಿಗೆ ಮೇಲೆ ಸರ್ಚ್ ಚಾರ್ಜ್ | - | 15% |
| | ಮೇಲಿನ ಎಲ್ಲಾ ಮೊತ್ತಕ್ಕೆ | - | |
| iii. | ಆದಾಯ ತೆರಿಗೆ | - | 15% |
| iv. | ಆದಾಯ ತೆರಿಗೆ ಮೇಲೆ ಸರ್ಚ್ ಚಾರ್ಜ್ | - | 5% |

ಈ ಮೇಲ್ಕಂಡ ತೆರಿಗೆಗಳು ಹಾಲಿ ಚಾಲ್ತಿಯಲ್ಲಿದ್ದು ಬದಲಾವಣೆಯಾದಲ್ಲಿ ಆಗಿನ ದರಗಳಲ್ಲಿ ತೆರಿಗೆಗಳನ್ನು ವಸೂಲಿ ಮಾಡಲಾಗುವುದು.

6. ಈ ಕ್ರಮದಿಂದ ಇಲಾಖೆಗೆ ಆಗಬಹುದಾದ ನಷ್ಟವನ್ನು ಮೂಲತಃ ವಿಜೇತ ಟೆಂಡರ್‌ದಾರರು ಕಟ್ಟಿಕೊಡಲು ವಿಫಲರಾದರೆ ಇದರ ಮೊತ್ತವನ್ನು ಬಾಕಿ ಕಂದಾಯದ ರೂಪದಲ್ಲಿ ವಸೂಲಿ ಮಾಡಲು ಕ್ರಮ ಕೈಗೊಳ್ಳಲಾಗುವುದು.
7. ನಿಯಮದಂತೆ ಕರ್ತವ್ಯ ನಿರ್ವಹಿಸಲು ವಿಫಲರಾದ ವಿಜೇತ ಟೆಂಡರ್‌ದಾರರ ಇಡಿಗಂಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ಜೊತೆಗೆ ಅವರ ಆರ್ಥಿಕ ಜವಾಬ್ದಾರಿಯಲ್ಲಿ ಟೆಂಡರ್ ಕರೆಯಲಾಗುವುದು.
8. ಮೇಲ್ಕಂಡ ಟೆಂಡರ್ ಕಂ ಹರಾಜನ್ನು ಭಾಗವಹಿಸುವ ಮುನ್ನಾ ವಲಯ ಅರಣ್ಯಾಧಿಕಾರಿ, ಕೆ.ಆರ್.ಪುರಂ ರವರನ್ನು ಸಂಪರ್ಕಿಸಿ ಬೆಂಗಳೂರು ಬನ್ನೇರುಘಟ್ಟ ಆನೇಕಲ್ ರಸ್ತೆಯ ಮರಗಳನ್ನು ನೋಡಲು ಅನುಮತಿ ಪಡೆದು ಪರಿಶೀಲಿಸಿಕೊಳ್ಳುವುದು.
9. ಬ್ಲಾಕ್ ಲಿಸ್ಟ್ ಆಗಿರುವವರು ಇನ್‌ಸಾಲ್ವೆಂಟ್ಸ್, ಡಿಫಾಲ್ಟರ್ಸ್, ಮತ್ತು ಮೈನರ್, ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವುದಕ್ಕೆ ಅರ್ಹರಾಗಿರುವುದಿಲ್ಲ.
10. ಸದರಿ ಹರಾಜಿನಲ್ಲಿ ಪಡೆದುಕೊಂಡ ಮರಗಳನ್ನು ಕಟಾವು ಮಾಡುವ ಹಾಗೂ ಸಾಗಾಣಿಕೆ ಮಾಡುವ ವೆಚ್ಚವನ್ನು ಸ್ವತಃ ಗುತ್ತಿಗೆದಾರರು ನಿರ್ವಹಿಸಿಕೊಳ್ಳತಕ್ಕದ್ದು ಹಾಗೂ ಇದರ ಸಂಬಂಧ ಯಾವುದೇ ಅಡೆತಡೆಗಳಿಗೆ ಅರಣ್ಯ ಇಲಾಖೆ ಜವಾಬ್ದಾರರಾಗಿರುವುದಿಲ್ಲ ಹಾಗೂ ಈ ಕಛೇರಿಯಿಂದ ಮರ ಕಟಾವು ಮಾಡಲು ಮಂಜೂರಾತಿ ನೀಡಿದ ದಿನಾಂಕದಿಂದ 15 ದಿನದೊಳಗೆ ಸದರಿ ಮರಗಳನ್ನು ಕಟಾವು ಮಾಡಿ ಸಾಗಾಣಿಕೆ ಮಾಡತಕ್ಕದ್ದು.
11. ಸದರಿ ಟೆಂಡರ್ ಕಂ ಹರಾಜಿನಲ್ಲಿ ಪಡೆದುಕೊಂಡ ಮರಗಳನ್ನು ಕಟಾವು ಮಾಡುವಾಗ ಸಾರಿಗೆ ಸಂಚಾರಕ್ಕೆ ಹಾಗೂ ಯಾವುದೇ ಸಾರ್ವಜನಿಕ ಆಸ್ತಿ-ಪಾಸ್ತಿಗಳಿಗೆ ಧಕ್ಕೆ ಆಗದಂತೆ ಕಡಿದು ಸಾಗಾಣಿಕೆ ಮಾಡತಕ್ಕದ್ದು ಒಂದು ವೇಳೆ ಸಾರ್ವಜನಿಕ ಆಸ್ತಿಗೆ ತೊಂದರೆಯಾದಲ್ಲಿ ಅದಕ್ಕೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ.
12. ಈ ಟೆಂಡರ್ ಕಂ ಹರಾಜಿಗೆ ಸಂಬಂಧಿಸಿದಂತೆ ಬೇಕಾದ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.
13. ಯಾವುದೇ ತಕರಾರಿನ ಬಗ್ಗೆ ಬೆಂಗಳೂರು ನಗರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಬಹುದು ಅವರ ಆದೇಶವು ಅಧೀನಾಧಿಕಾರಿಗಳು ಹಾಗೂ ಗುತ್ತಿಗೆದಾರರ ಪಾಲನಾರ್ಹವಾದುದು.
14. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಬಗ್ಗೆ ತೃಪ್ತಿ ಇಲ್ಲವಾದರೆ ಬೆಂಗಳೂರು ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಬಹುದು. ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
15. ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯದ ಸಂದರ್ಭ ಉದ್ಭವಿಸಿದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.
16. ಟೆಂಡರ್ ಪ್ರಕಟಣೆ ಯಾವುದೇ ನಿಯಮವನ್ನು ಉಲ್ಲಂಘಿಸಿದಲ್ಲಿ ಮರು ಟೆಂಡರ್ ಕರೆದು ಕೆಲಸ ಮಾಡಿಸುವ ಯಾವುದೇ ಕಾರಣವನ್ನು ಕೊಡದೆ ಇಡೀ ಟೆಂಡರ್‌ನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಕಾಶವನ್ನು ಕಾಯ್ದಿರಿಸಿಕೊಳ್ಳಲಾಗಿದೆ.
17. ಮರ ಕಡಿತಲೆ ಆದ ನಂತರ ಸಾಗಾಣಿಕೆ ಮಾಡಿಕೊಳ್ಳುವಾಗ ಸಾಗಾಣಿಕೆಯ ರಹದಾರಿ ಪತ್ರವನ್ನು ಸಂಬಂಧಿಸಿದ ವಲಯ ಅರಣ್ಯಾಧಿಕಾರಿ, ಕೆ.ಆರ್.ಪುರಂ ವಲಯದಿಂದ ಪಡೆದುಕೊಳ್ಳತಕ್ಕದ್ದು.

ಪಿ.ಆರ್. 188 ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು